# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 582
2. ಸದಸ್ಯರ ಹೆಸರು : ಶ್ರೀ ಎಸ್.ನಾಗರಾಜು (ಸಂದೇಶ್ ನಾಗರಾಜು)
3. ಉತ್ತರಿಸಬೇಕಾದ ದಿನಾಂಕ : 24-09-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಪಿರಿಯಾಪಟ್ಟಣ ತಾಲ್ಲೂಕು, ಮುತ್ತಿನ ಮುಳಸೋಗೆ ಬಳಿ ಕಾವೇರಿ ನದಿಯಿಂದ ಏತ ನೀರಾವರಿ ಯೋಜನೆ ಮೂಲಕ ಎಷ್ಟು ಕೆರೆ ಕಟ್ಟೆಗಳಿಗೆ ನೀರು ತುಂಬಿಸಲು ಯೋಜನೆಯನ್ನು ಸಿದ್ಧಪಡಿಸಲಾಗಿದೆ; | ಪಿರಿಯಾಪಟ್ಟಣ ತಾಲ್ಲೂಕಿನ ಮುತ್ತಿನಮುಳುಸೋಗೆ ಗ್ರಾಮದ ಬಳಿ ಕಾವೇರಿ ನದಿಯಿಂದ ನೀರನ್ನು ಎತ್ತಿ ಪಿರಿಯಾಪಟ್ಟಣ ತಾಲ್ಲೂಕಿನ 133 ಕೆರೆಗಳನ್ನು ಮತ್ತು 17 ಕಟ್ಟೆಗಳಿಗೆ ಕುಡಿಯುವ ನೀರಿಗಾಗಿ ತುಂಬಿಸಲು ಉದ್ದೇಶಿಸಲಾಗಿದೆ.<br>ಸದರಿ ಕಾಮಗಾರಿಯನ್ನು ರೂ.246.90 ಕೋಟಿ ಗುತ್ತಿಗೆ ಮೊತ್ತಕ್ಕೆ, 18 ತಿಂಗಳುಗಳ (ಮಳೆಗಾಲ ಸೇರಿ) ಕಾಲಾವಧಿಯೊಂದಿಗೆ ಗುತ್ತಿಗೆ ಆಧಾರದ ಮೇಲೆ ವಹಿಸಲಾಗಿದೆ. ಪ್ರಸ್ತುತ ಕಾಮಗಾರಿಯ ಪ್ರಗತಿಯ ವಿವರ ಕೆಳಕಂಡಂತಿದೆ:<br>• Intake channel, Fore bay ಕಾಮಗಾರಿ ಪೂರ್ಣಗೊಂಡಿರುತ್ತದೆ. |
| ಆ | ಈ ಯೋಜನೆಯ ಅಂದಾಜು ವೆಚ್ಚ ಎಷ್ಟು; ಈಗ ಎಷ್ಟು ಹಣ ಬಿಡುಗಡೆ ಮಾಡಲಾಗಿದೆ; ಯಾವ ಯಾವ ಕಾಮಗಾರಿಗಳು ಪೂರ್ಣಗೊಂಡಿವೆ; ಉಳಿದ ಕಾಮಗಾರಿಗಳು ಯಾವ ಹಂತದಲ್ಲಿದೆ; ಎಷ್ಟು ಕೆರೆಗಳಿಗೆ ನೀರು ತುಂಬಿಸಲಾಗಿದೆ; ನಿಧಾನಗತಿಯಿಂದ ಸಾಗಿರುವ ಈ ಯೋಜನೆಯನ್ನು ಬೇಗ ಪೂರ್ಣಗೊಳಿಸಲು ಕ್ರಮ ಜರುಗಿಸಲಾಗುವುದೇ? | • ಪಂಪ್ ಹೌಸ್‌ನ ಮೇಲ್ಛಾವಣಿ ಕಾಮಗಾರಿ ಪ್ರಗತಿಯಲ್ಲಿದೆ.<br>• ಮುಖ್ಯ ವಿತರಣಾ ತೊಟ್ಟಿಯ ಕಾಮಗಾರಿ ಪ್ರಗತಿಯಲ್ಲಿದೆ.<br>• ರೈಸಿಂಗ್ ಮೇನ್ 11.37 ಕಿ.ಮೀ ಉದ್ದದ ಪೈಕಿ 7.230 ಕಿಮೀ ಉದ್ದಕ್ಕೆ ಪೈಪ್ ಅಳವಡಿಸಲಾಗಿರುತ್ತದೆ.<br>• Trash rack gate, Stop log gate, Service road, Substation civil structure &Surge protection work, Gravity main pipe line, Electro mechanical works, Electrical Substation & Transmission line ಕಾಮಗಾರಿಗಳನ್ನು ಪ್ರಾರಂಭಿಸಬೇಕಾಗಿರುತ್ತದೆ.<br>ಈವರೆಗೆ ಕಾಮಗಾರಿಯ ಆರ್ಥಿಕ ವೆಚ್ಚ ರೂ.115.81 ಕೋಟಿಗಳು.<br>ಯೋಜನೆಯ Head works ನಿರ್ಮಾಣದ ಸ್ಥಳದಲ್ಲಿ ದಿನಾಂಕ:16.08.2018 ರಂದು ಕಾವೇರಿ ನದಿಯ ಪ್ರವಾಹದಿಂದ H.F.L. (High Flood level) ಮಟ್ಟ 826.81 ಮೀ. ಮತ್ತು ದಿನಾಂಕ 10.08.2019 ರಂದು ಕಾವೇರಿ ನದಿಯಲ್ಲಿ ಪ್ರವಾಹವು ಉಂಟಾಗಿ ಮತ್ತೊಮ್ಮೆ ಹೆಚ್.ಎಫ್.ಎಲ್. ಮಟ್ಟವು 827.20 ಮೀ.ಗಳಿಗೆ ಏರಿಕೆಯಾಗಿದ್ದು, ಈ ಮಟ್ಟವು ವಿನ್ಯಾಸಿತ MFL(Motor Floor level) ಗೆ ಹೋಲಿಸಿದಾಗ 0.30 ಮೀ ಮಾತ್ರ ಕಡಿಮೆ ಇರುತ್ತದೆ. ಈ ಹಿನ್ನಲೆಯಲ್ಲಿ MFL ಅನ್ನು 828.41 ಮೀ.ಗಳಿಗೆ ಪರಿಷ್ಕರಿಸಲಾಗಿರುತ್ತದೆ ಹಾಗೂ ಪರಿಷ್ಕರಿಸಿದ ಈ ವ್ಯತ್ಯಾಸದಿಂದ Sub-station formation Level & Transmission line Level ಇವುಗಳನ್ನು ಮಾರ್ಪಾಡಿಸುವ ಸಲುವಾಗಿ ಕಾಮಗಾರಿಯ ಪ್ರಗತಿಯಲ್ಲಿ ವಿಳಂಬವಾಗಿರುತ್ತದೆ.<br>ಇಲಾಖೆಯ ವತಿಯಿಂದ ಭೂಸ್ವಾಧೀನ ಹಾಗೂ ಬೆಳೆ ಪರಿಹಾರಕ್ಕೆ ಸೂಕ್ತ ಕ್ರಮ ಕೈಗೊಳ್ಳಲಾಗಿರುತ್ತದೆ ಹಾಗೂ ಕಾಮಗಾರಿಯನ್ನು ಸಮರೋಪಾದಿಯಲ್ಲಿ ಕೈಗೊಂಡು ಶೀಘ್ರವಾಗಿ ಪೂರ್ಣಗೊಳಿಸಲು ಗುತ್ತಿಗೆದಾರರಿಗೆ ಸೂಚಿಸಲಾಗಿದ್ದು, ಕಾಮಗಾರಿಯು ಪ್ರಗತಿಯಲ್ಲಿದೆ. ಡಿಸೆಂಬರ್-2021ರೊಳಗಾಗಿ ಪೂರ್ಣಗೊಳಿಸಲು ಎಲ್ಲಾ ಸೂಕ್ತ ಕ್ರಮಗಳು ಜರುಗಿಸಲಾಗುವುದು. |

*ಸಂಖ್ಯೆ:ಜಸಂಇ 123 ಎನ್‌ಎಲ್‌ಎ 2020*

**(ರಮೇಶ್ ಲ. ಜಾರಕಿಹೊಳಿ)**
**ಜಲಸಂಪನ್ಮೂಲ ಸಚಿವರು**